ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಆರೋಗ್ಯ ಭವನಕ್ಕೆ ಇಲಾಖೆಗಳನ್ನು ಸ್ಥಳಾಂತರಿಸುವ ಕುರಿತು

ಶ್ರೀ ಪ್ರಾಣೇಶ್ ಎಂ.ಕೆ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

985 (1039) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಾರ್ವಜನಿಕರ ಅನುಕೂಲಕ್ಕಾಗಿ ಬೆಂಗಳೂರಿನ ಆರೋಗ್ಯ ಇಲಾಖೆಯ ಎಲ್ಲಾ ಕಛೇರಿಗಳನ್ನು ಮಾಗಡಿ ರಸ್ತೆಯಲ್ಲಿರುವ "ಆರೋಗ್ಯ ಭವನ"ಕ್ಕೆ ಸ್ಥಳಾಂತರಿಸಲು ಸರ್ಕಾರಕ್ಕೆ ಇರುವ ಅಡೆತಡೆಗಳೇನು ; ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು;

(ಆ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರತಿ ಒಬ್ಬ ವಿಷಯ ನಿರ್ವಾಹಕರಲ್ಲಿ ವಿಲೇವಾರಿಗೆ ಬಾಕಿ ಇರುವ ಕಡತಗಳ ಸಂಪೂರ್ಣ ವಿವರ ಒದಗಿಸುವುದು;

(ಇ) ಆರೋಗ್ಯ ಇಲಾಖೆಯ ಆಹಾರ ಸುರಕ್ಷತಾ ವಿಭಾಗದಲ್ಲಿ ಕಳೆದ ಮೂರು ವರ್ಷಗಳಿಂದ ನಿಗದಿತ ಐದಕ್ಕಿಂತ ಕಡಿಮೆ ಸ್ಯಾಂಪಲ್‌ಸ್‌ಗಳನ್ನು ತೆಗೆದು ಕಳಪೆ ಸಾಧನೆ ತೋರಿರುವ ಆಹಾರ ಸುರಕ್ಷತಾಧಿಕಾರಿಗಳು/ಅಂಕಿತಾಧಿಕಾರಿಗಳ ವಿವರ ಒದಗಿಸುವುದು; ಸದರಿಯವರ ವಿರುದ್ಧ ಕೈಗೊಂಡ ಕ್ರಮಗಳೇನು; ವಿಭಾಗದಲ್ಲಿ ವಿಲೇವಾರಿಗೆ ಬಾಕಿ ಇರುವ ಕಡತಗಳ ಸಂಪೂರ್ಣ ವಿವರ ನೀಡುವುದು;

(ಈ) ಆಹಾರ ಸುರಕ್ಷತಾ ವಿಭಾಗಕ್ಕೆ ಸಂಬಂಧಿಸಿದಂತೆ ಯಾವ ಯಾವ ಘನ ನ್ಯಾಯಾಲಯಗಳಲ್ಲಿ ಯಾವ ಯಾವ ಕೇಸುಗಳು ಮೊಕದ್ದಮೆಗಳು ವಿಚಾರಣೆಗೆ ಬಾಕಿ ಇವೆ; ಈ ಬಗ್ಗೆ ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಂಡಿದೆ; (ಸಂಪೂರ್ಣ ವಿವರ ಒದಗಿಸುವುದು)

(ಉ) ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಆಹಾರ ಸುರಕ್ಷತಾಧಿಕಾರಿಗಳನ್ನು ಆಹಾರ ಸುರಕ್ಷತಾ ವಿಭಾಗದಲ್ಲಿಯೇ ವಿಲೀನಗೊಳಿಸಲು ಇರುವ ತೊಂದರೆ ಏನು; ಹಾಗಿದ್ದಲ್ಲಿ, ಈ ಬಗ್ಗೆ ಯಾವಾಗ ಆದೇಶ ಹೊರಡಿಸಲಾಗುವುದು ; (ವಿವರ ನೀಡುವುದು) ಈ ವಿಭಾಗದಲ್ಲಿ ಅಮಾನತ್ತುಗೊಂಡಿರುವ ಶಿಸ್ತುಕ್ರಮ ಎದುರಿಸುತ್ತಿರುವವರ ವಿವರ ನೀಡುವುದು; ಅಮಾನತ್ತುಗೊಂಡಿರುವವರನ್ನು ಪುನಃ ಇದೇ ವಿಭಾಗಕ್ಕೆ ನೇಮಕ ಮಾಡಿಕೊಳ್ಳಲು ಸರ್ಕಾರಕ್ಕೆ ಇರುವ ತೊಂದರೆ ಏನು? (ವಿವರ ನೀಡುವುದು)